# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2433
ಮಾನ್ಯ ಸದಸ್ಯರ ಹೆಸರು : ಶ್ರೀಮತಿ ಭಾರತಿ ಶೆಟ್ಟಿ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು
ಉತ್ತರಿಸಬೇಕಾದ ದಿನಾಂಕ : 22.03.2022

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ತೃತೀಯ ಲಿಂಗಿಗಳ ಅಂಕಿ-ಅಂಶಗಳನ್ನು ಜಿಲ್ಲಾವಾರು ಒದಗಿಸುವುದು; | • ತೃತೀಯ ಲಿಂಗಿಗಳ ಜನಗಣತಿಯನ್ನುಇದುವರೆಗೂ ಪ್ರತ್ಯೇಕವಾಗಿ ನಡೆಸಿರುವುದಿಲ್ಲ.<br>• 2011ರ ಜನಗಣತಿ ಪ್ರಕಾರ ಒಟ್ಟು 20,266 ಲಿಂಗತ್ವ ಅಲ್ಪ ಸಂಖ್ಯಾತರು ರಾಜ್ಯದಲ್ಲಿ ಇರುತ್ತಾರೆ.<br>• ಲಿಂಗತ್ವ ಅಲ್ಪಸಂಖ್ಯಾತರ ಅಂಕಿ ಅಂಶಗಳನ್ನು ಪಡೆಯಲು ಬೇಸ್ ಲೇನ್ ಸರ್ವೆ ನಡೆಸಲು ಆದೇಶ ಹೊರಡಿಸಲಾಗಿದ್ದು, ಬೇಸ್ ಲೈನ್ ಸರ್ವೆ ನಡೆಸುವ ಮೂರ್ವ ಪ್ರಕ್ರಿಯೆ ಚಾಲ್ತಿಯಲ್ಲಿದೆ. |
| ಆ)<br><br><br>ಇ) | ತೃತೀಯ ಲಿಂಗಿಗಳ ಬೇಡಿಕೆಗಳೇನು; ಇವುಗಳ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು;<br>ಮತ್ತು<br>ಉಳಿದ ಬೇಡಿಕೆಗಳ ಬಗ್ಗೆ ಸರ್ಕಾರ ಯಾವ ಕ್ರಮ ಕೈಗೊಳ್ಳಲಿದೆ; | ತೃತೀಯ ಲಿಂಗಿಗಳ ಬೇಡಿಕೆಗಳ ಕುರಿತು ಕರ್ನಾಟಕ ಲಿಂಗತ್ವ ಅಲ್ಪಸಂಖ್ಯಾತರ ಸಂಘ, ಸಿರುಗುಪ್ಪ ಬಳ್ಳಾರಿ ಜಿಲ್ಲೆ ಇವರು ಸಲ್ಲಿಸಿರುವ ಅರ್ಜಿಯನ್ನು ಪರಿಶೀಲಿಸಲಾಗುತ್ತಿದೆ. |
| ಈ) | ತೃತೀಯ ಲಿಂಗಿಗಳನ್ನು ಮುಖ್ಯವಾಹಿನಿಯಲ್ಲಿ ಇತರರಂತೆ ಪರಿಗಣಿಸಲು ಇರುವ ಸಮಸ್ಯೆಗಳೇನು; ಈ ಬಗ್ಗೆ ಸಮಾಜಕ್ಕೆ ಸರ್ಕಾರದ ಸಂದೇಶಗಳೇನು; | ಮಾನ್ಯ ಸರ್ವೋಚ್ಚ ನ್ಯಾಯಾಲಯದ ದಿನಾಂಕ:15-04-2014ರ ತೀರ್ಪಿನಂತೆ ತೃತೀಯ ಲಿಂಗಿಗಳನ್ನು ಸಮಾಜದ ಮುಖ್ಯ ವಾಹಿನಿಗೆ ತರುವ ಸಲುವಾಗಿ ರಾಜ್ಯ ಸರ್ಕಾರವು ಸರ್ಕಾರದ ಆದೇಶ ಸಂಖ್ಯೆ: ಮಮಇ 16 ಮಅನಿ 2014, ದಿ:18-12-2017 ರಲ್ಲಿ "ಕರ್ನಾಟಕ ರಾಜ್ಯ ಟ್ರಾನ್ಸ್‌ಜೆಂಡರ್ಸ್ ನೀತಿ 2017ನ್ನು" ಜಾರಿಗೆ ತಂದಿದೆ. ಇದರಂತೆ ವಿವಿಧ ಇಲಾಖೆಗಳಲ್ಲಿ ಲಭ್ಯವಿರುವ ಸೌಲಭ್ಯಗಳನ್ನು ತೃತೀಯ ಲಿಂಗಿಗಳಿಗೆ ಒದಗಿಸಲು ಕ್ರಮ ವಹಿಸುವಂತೆ ಎಲ್ಲಾ ಇಲಾಖೆಗಳನ್ನು ಕೋರಲಾಗಿದೆ. |
| ಉ) | ರಸ್ತೆಗಳ ಸಿಗ್ನಲ್‌ಗಳ ಬಳಿ ಭಿಕ್ಷೆ ಬೇಡುವ ಪದ್ಧತಿ ಹಾಗೂ ಲೈಂಗಿಕ ಶೋಷಣೆ ತಡೆಗಟ್ಟಲು ಸರ್ಕಾರ ಯಾವ ರೀತಿ ಕ್ರಮ ಕೈಗೊಂಡಿದೆ? (ವಿವರ ಒದಗಿಸುವುದು) | ಸಮಾಜ ಕಲ್ಯಾಣ ಇಲಾಖೆಯ ಅಧೀನದಲ್ಲಿ ಬರುವ ಕೇಂದ್ರ ಪರಿಹಾರ ಸಮಿತಿಯು ಕರ್ನಾಟಕ ಭಿಕ್ಷಾಟನಾ ನಿಷೇಧ ಅಧಿನಿಯಮ ಮತ್ತು ನಿಯಮಗಳು 1975 ರ ಸೆಕ್ಷನ್ 2(4)ರಂತೆ 18 ವರ್ಷಗಳ ಮೇಲ್ಪಟ್ಟ ಮಹಿಳೆ ಹಾಗೂ 16 ವರ್ಷ ಮೇಲ್ಪಟ್ಟ ಪುರುಷರು ಭಿಕ್ಷಾಟನೆಯಲ್ಲಿ ತೊಡಗಿದ್ದಲ್ಲಿ, ಭಿಕ್ಷಾಟನೆಯ ಅಪರಾಧಕ್ಕಾಗಿ ಬಂಧಿಸಿ, ನಿರಾಶ್ರಿತರ ಪರಿಹಾರ ಕೇಂದ್ರಗಳ ರಕ್ಷಣೆಯಲ್ಲಿರಿಸಲಾಗುತ್ತದೆ.<br><br>ತೃತೀಯ ಲಿಂಗಿಗಳು ಭಿಕ್ಷಾಟನೆಯಲ್ಲಿ ತೊಡಗಿದ್ದಲ್ಲಿ ಅವರುಗಳನ್ನು ಬಂಧಿಸಲು ಕರ್ನಾಟಕ ಭಿಕ್ಷಾಟನಾ ನಿಷೇಧ |

| | | |
|---|---|---|
| | | ಅಧಿನಿಯಮದಲ್ಲಿ ಅವಕಾಶ ಇಲ್ಲದ ಪ್ರಯುಕ್ತ ಬಂಧಿಸಲಾಗುತ್ತಿಲ್ಲ.<br>ಆದಾಗ್ಯೂ, ಸಾರ್ವಜನಿಕರ ದೂರುಗಳ ಮೇರೆಗೆ ಭಿಕ್ಷಾಟನೆಯಲ್ಲಿ ತೊಡಗಿರುವ ತೃತೀಯ ಲಿಂಗಿಗಳನ್ನು ಪೋಲೀಸರು ಬಂಧಿಸಿ, ಕೇಂದ್ರಕ್ಕೆ ಕರೆತರುವ ಸಂದರ್ಭಗಳಲ್ಲಿ ಸ್ವೀಕೃತಾಧಿಕಾರಿಗಳ ಹಂತದಲ್ಲಿ ಪ್ರಾಥಮಿಕ ವಿಚಾರಣೆ ನಡೆಸಿ, ಅವರು ಭಿಕ್ಷೆ ಬೇಡುವುದು ಖಚಿತಗೊಂಡಲ್ಲಿ, ಅಂತಹವರಿಂದ ಇನ್ನು ಮುಂದೆ ಭಿಕ್ಷೆ ಬೇಡುವುದಿಲ್ಲವೆಂದು ಮುಚ್ಚಳಿಕೆ ಪತ್ರ ಪಡೆದು, ಎಚ್ಚರಿಕೆ ನೀಡಿ, ಬಿಡುಗಡೆ ಮಾಡಲಾಗುತ್ತಿದೆ. ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |

ಮಮಇ/46/ಮಅನಿ/2022

Halappa

(ಹಾಲಪ್ಪ ಬಸಪ್ಪ ಆಚಾರ್)
ಮಾನ್ಯ ಗಣಿ ಮತ್ತು ಭೂವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

೬ ಸಂಖ್ಯೆ

ಅನುಬಂಧ-ಇ

ದಿನಾಂಕ 01/04/2021 ರಿಂದ ಮಾರ್ಚ್ 17/03/2022
ರವರೆಗೆ ಬಂಧಿಸಿ ಎಚ್ಚರಿಕೆ ನೀಡಿ ಬಿಡುಗಡೆ ಮಾಡಿದ
ಮಂಗಳಮುಖಿಯರ ವಿವರ

| ಕ್ರಸಂ | ಮಾಹೆ | ಸಂಖ್ಯೆ |
|---|---|---|
| 1 | ಏಪ್ರಿಲ್-2021 | 0 |
| 2 | ಮೇ-2021 | 0 |
| 3 | ಜೂನ್-2021 | 0 |
| 4 | ಜುಲೈ-2021 | 0 |
| 5 | ಅಗಸ್ಟ್-2021 | 0 |
| 6 | ಸೆಪ್ಟಂಬರ್-2021 | 1 |
| 7 | ಅಕ್ಟೋಬರ್-2021 | 5 |
| 8 | ನವೆಂಬರ್-2021 | 0 |
| 9 | ಡಿಸೆಂಬರ್-2021 | 0 |
| 10 | ಜನವರಿ-2022 | 1 |
| 11 | ಫೆಬ್ರುವರಿ-2022 | 0 |
| 12 | ಮಾರ್ಚ್-2022 | 1 |
| ಒಟ್ಟು | | 8 |

# ಪೂರಕ ಟಿಪ್ಪಣಿ

ಕರ್ನಾಟಕ ಲಿಂಗತ್ವ ಅಲ್ಪಸಂಖ್ಯಾತರ ಸಂಘ, ಸಿರುಗುಪ್ಪ, ಬಳ್ಳಾರಿ ಜಿಲ್ಲೆ, ಇವರು ಮಾನ್ಯ ವಿಧಾನಪರಿಷತ್ತಿನ ಸದಸ್ಯರಾದ ಶ್ರೀಮತಿ ಭಾರತಿ ಶೆಟ್ಟಿ (ನಾಮನಿರ್ದೇಶನ ಹೊಂದಿದವರು) ಇವರಿಗೆ ಬೇಡಿಕೆ ಸಲ್ಲಿಸಿರುತ್ತಾರೆ. ಸದರಿ ಮನವಿಯಲ್ಲಿ ವಿವಿಧ ಅಂಶಗಳಿಗೆ ಸಂಬಂಧಿಸಿದಂತೆ ಮನವಿಯನ್ನು ಮಾಡಿರುತ್ತಾರೆ.

- 2011ರ ಜನಗಣತಿ ಪ್ರಕಾರ ರಾಜ್ಯದಲ್ಲಿ 20,266 ಲಿಂಗತ್ವ ಅಲ್ಪಸಂಖ್ಯಾತರನ್ನು ಗುರುತಿಸಲಾಗಿರುತ್ತದೆ.
- ಲಿಂಗತ್ವ ಅಲ್ಪಸಂಖ್ಯಾತರಿಗಾಗಿ ಪುನರ್ವಸತಿ ಯೋಜನೆಯನ್ನು 2013-14ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಪ್ರಸ್ತುತವಾಗಿ ಸದರಿ ಯೋಜನೆಯಡಿ ಆದಾಯೋತ್ಪನ್ನಕರ ಚಟುವಟಿಕೆಗಳನ್ನು ಕೈಗೊಳ್ಳಲು ಪ್ರತಿ ಲಿಂಗತ್ವ ಅಲ್ಪಸಂಖ್ಯಾತರಿಗೆ 2013-14ನೇ ಸಾಲಿನಲ್ಲಿ ನೀಡಲಾಗುತ್ತಿದ್ದ ಸಹಾಯಧನದ ಮೊತ್ತ ರೂ.20,000/- ಗಳನ್ನು ಪರಿಷ್ಕರಿಸಿ, 2017-18ನೇ ಸಾಲಿನಿಂದ ರೂ.50,000/- (ರೂ.25,000/- ಸಾಲ ಮತ್ತು ರೂ.25,000/- ಸಹಾಯಧನ) ಗಳ ಆರ್ಥಿಕ ಸೌಲಭ್ಯ ನೀಡಲಾಗುತ್ತಿತ್ತು. ಯೋಜನೆಯನ್ನು ಪರಿಷ್ಕರಿಸಿ 2021-22ನೇ ಸಾಲಿನಿಂದ ರೂ.30,000/- ಗಳ ಪ್ರೋತ್ಸಾಹ ಧನವನ್ನು ನಿಗಮದಿಂದ ನೇರವಾಗಿ ನೀಡಲಾಗುತ್ತಿದೆ. ಸದರಿ ಯೋಜನೆಯಡಿ ಇದುವರೆವಿಗೆ 7201 ಲಿಂಗತ್ವ ಅಲ್ಪಸಂಖ್ಯಾತ ಫಲಾನುಭವಿಗಳಿಗೆ ಸವಲತ್ತು ನೀಡಲಾಗಿದೆ.
- ಟ್ರಾನ್ಸ್‌ಜೆಂಡರ್ಸ್‌ರವರನ್ನು ಭಯ, ಅವಮಾನ, ಲಿಂಗ ತಾರತಮ್ಯತೆ, ಸಾಮಾಜಿಕ ತಾರತಮ್ಯತೆ ಮುಂತಾದ ಸಮಸ್ಯೆಗಳಿಂದ ಹೊರತಂದು ಮೂಲಭೂತ ಸೌಕರ್ಯಗಳಾದ ಉದ್ಯೋಗ, ಆದಾಯ ಸೃಷ್ಟಿಸುವ, ವಸತಿ/ಆಶ್ರಯ, ಶಿಕ್ಷಣ, ಆರೋಗ್ಯ, ಮಾಸಿಕ ಪಿಂಚಣಿ ಸೌಲಭ್ಯಗಳನ್ನು ವಿವಿಧ ಇಲಾಖೆಗಳ ಸಹಭಾಗಿತ್ವದೊಂದಿಗೆ ಒದಗಿಸಿ ಟ್ರಾನ್ಸ್‌ಜೆಂಡರ್ಸ್‌ರವರನ್ನು ಸಮಾಜದ ಮುಖ್ಯ ವಾಹಿನಿಗೆ ತರಲು "ಕರ್ನಾಟಕ ರಾಜ್ಯ ಟ್ರಾನ್ಸ್‌ಜೆಂಡರ್ಸ್ ನೀತಿ - 2017" ನ್ನು ದಿನಾಂಕ :18-12-2017 ರಂದು ಜಾರಿಗೊಳಿಸಲಾಗಿದೆ.
- "ಕರ್ನಾಟಕ ರಾಜ್ಯ ಟ್ರಾನ್ಸ್‌ಜೆಂಡರ್ಸ್-ನೀತಿ 2017" ನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ರಾಜ್ಯ ಮಟ್ಟದಲ್ಲಿ ಟ್ರಾನ್ಸ್‌ಜೆಂಡರ್ಸ್ ಕೋಶವನ್ನು ಸರ್ಕಾರದ ಆದೇಶ ಸಂಖ್ಯೆ :ಮಮಇ 02 ಮಅನಿ 2018, ದಿನಾಂಕ: 10-01-2018 ರನ್ವಯ ರಚಿಸಲಾಗಿರುತ್ತದೆ.
- ಸರ್ಕಾರದ ಆದೇಶ ಸಂಖ್ಯೆ:ಮಮಇ/87/ಮಅನಿ/2018, ದಿನಾಂಕ:29-01-2019ರಂತೆ ಟ್ರಾನ್ಸ್‌ಜೆಂಡರ್ಸ್‌ರವರ ಜಿಲ್ಲಾ ಮಟ್ಟದ ಸಮನ್ವಯ ಮತ್ತು ಉಸ್ತುವಾರಿ ಸಮಿತಿ ಕೋಶ, ತಾಲ್ಲೂಕು ಮಟ್ಟದ ಸಮಿತಿ ಮತ್ತು ಬೆಂಬಲ ಘಟಕ ರಚಿಸಲಾಗಿರುತ್ತದೆ.
- 2020-21ನೇ ಸಾಲಿನ ಆಯವ್ಯಯ ಪ್ರಮುಖ ಅಂಶಗಳಲ್ಲಿ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ಮೂಲಕ ಟ್ರಾನ್ಸ್‌ಜೆಂಡರ್ಸ್‌ರವರ ಮೂಲ ಹಂತದ ಬೇಸ್‌ಲೈನ್ ಸಮೀಕ್ಷೆಯೂ ಪ್ರಗತಿಯಲ್ಲಿದೆ.
- 2019-20ನೇ ಸಾಲಿನಲ್ಲಿ ಉದ್ಯೋಗಿನಿ ಯೋಜನೆಯಡಿ ಲಿಂಗತ್ವ ಅಲ್ಪಸಂಖ್ಯಾತರ ಪುನರ್ವಸತಿಗಾಗಿ ಸ್ವಯಂ ಉದ್ಯೋಗ ಕೈಗೊಳ್ಳಲು 200 ಭೌತಿಕ ಗುರಿಯನ್ನು ನಿಗದಿಪಡಿಸಲಾಗಿದ್ದು, 44 ಫಲಾನುಭವಿಗಳು ಈ ಯೋಜನೆಯ ಸೌಲಭ್ಯ ಪಡೆದಿರುತ್ತಾರೆ. ಸದರಿ ಯೋಜನೆಯಡಿ ನಿಯಮಾನುಸಾರ ಅರ್ಜಿ ಸಲ್ಲಿಸಿ ಯೋಜನೆಯ ಸೌಲಭ್ಯ ಪಡೆಯಬಹುದಾಗಿದೆ. ಉದ್ಯೋಗಿನಿ ಯೋಜನೆಯಡಿ ನೇರ ಸಾಲ ಸೌಲಭ್ಯ ಒದಗಿಸಲು ಅವಕಾಶವಿರುವುದಿಲ್ಲ.

- 2022–23ನೇ ಸಾಲಿನಲ್ಲಿ ಹೊಸ ಯೋಜನೆಯಡಿ ಲಿಂಗತ್ವ ಅಲ್ಪಸಂಖ್ಯಾತರನ್ನು ಸಮಾಜದ ಮುಖ್ಯವಾಹಿನಿಗೆ ತರುವ ನಿಟ್ಟಿನಲ್ಲಿ ಸದರಿಯವರ ಅವಶ್ಯಕತೆಗನುಗುಣವಾಗಿ ವಸತಿ ಸೌಲಭ್ಯವನ್ನು ಕಲ್ಪಿಸುವ ಸಲುವಾಗಿ ನಿಗಮದ ಮೂಲಕ ಪ್ರತಿ ಮನೆಗೆ (ರಾಜೀವಗಾಂಧಿ ವಸತಿ ನಿಗಮದ ಮೂಲಕ) ರೂ.5.00 ಲಕ್ಷಗಳಂತೆ 100 ಫಲಾನುಭವಿಗಳಿಗೆ ರೂ.5.00 ಕೋಟಿ ಅನುದಾನ ಒದಗಿಸಲು ಕೋರಲಾಗಿತ್ತು. ಆಯವ್ಯಯ 2022–23 ರ ಕಂಡಿಕೆ 149 ರಲ್ಲಿ ಲಿಂಗತ್ವ ಅಲ್ಪಸಂಖ್ಯಾತರನ್ನು ಸಮಾಜದ ಮುಖ್ಯವಾಹಿನಿಗೆ ತರುವ ನಿಟ್ಟಿನಲ್ಲಿ ರಾಜೀವಗಾಂಧಿ ವಸತಿ ನಿಗಮದ ಮೂಲಕ ಆದ್ಯತೆ ಮೇರೆಗೆ ಮನೆಯನ್ನು ನಿರ್ಮಿಸಲಾಗುವುದೆಂದು ಘೋಷಿಸಲಾಗಿದೆ. ಪ್ರಸುತ್ತ ದೇವರಾಜು ಅರಸು ಯೋಜನೆಯಡಿಯಲ್ಲಿ ರಾಜೀವಗಾಂಧಿ ವಸತಿ ನಿಗಮದ ಮೂಲಕ ಇದುವರೆಗೂ 42 ಮನೆಗಳನ್ನು ನಿರ್ಮಾಣ ಮಾಡಲು ಕ್ರಮವಹಿಸಲಾಗಿದೆ.

- ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 179 ಸೇನೆನಿ 2020, ಬೆಂಗಳೂರು ದಿನಾಂಕ:14.07.2021ರಲ್ಲಿ ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ನಿಯಮ 9ಕ್ಕೆ ತಿದ್ದುಪಡಿ ಮಾಡಿ ರಾಜ್ಯ ಸರ್ಕಾರಿ ಸೇವೆಗಳಿಗೆ ಮಾಡುವ ಎಲ್ಲಾ ನೇರ ನೇಮಕಾತಿಯಲ್ಲಿ ತೃತೀಯ ಲಿಂಗದ ಅಭ್ಯರ್ಥಿಗಳಿಗೆ ಶೇಕಡ 1 ರಷ್ಟು ಸಮತಳ ಮೀಸಲಾತಿಯನ್ನು ಕಲ್ಪಿಸಲಾಗಿದೆ.

ಸಾಮಾಜಿಕ ಭದ್ರತೆ ಹಾಗೂ ಪಿಂಚಣಿ ಇಲಾಖೆ ವತಿಯಿಂದ ಮೈತ್ರಿ ಯೋಜನೆಯಡಿ ಮಾಹೆಯಾನ ರೂ.800–00 ಗಳಂತೆ 1895 ಲಿಂಗತ್ವ ಅಲ್ಪಸಂಖ್ಯಾತ ಫಲಾನುಭವಿಗಳಿಗೆ ಮಾಸಾಶನವನ್ನು ನೀಡಲಾಗುತ್ತಿದೆ.

ಕರ್ನಾಟಕ ಲಿಂಗತ್ವ ಅಲ್ಪಸಂಖ್ಯಾತರ ಸಂಘ, ಸಿರುಗುಪ್ಪ ಬಳ್ಳಾರಿ ಜಿಲ್ಲೆ ಇವರಿಂದ ಸ್ವೀಕೃತವಾದ ಅರ್ಜಿಯನ್ನು ಪರಿಶೀಲಿಸಲಾಗುತ್ತಿದೆ.

ಕರ್ನಾಟಕ ಭಿಕ್ಷಾಟನಾ ನಿಷೇಧ ಅಧಿನಿಯಮ 1975 ರ ಸೆಕ್ಷನ್ 3 ರನ್ವಯ ಭಿಕ್ಷೆ ಬೇಡುವುದನ್ನು ನಿಷೇಧಿಸಲಾಗಿದೆ. ಅಧಿನಿಯಮದ ಸೆಕ್ಷನ್2(4) ರನ್ವಯ 16 ವರ್ಷ ತುಂಬಿದ ಪುರುಷ, 18 ವರ್ಷ ತುಂಬಿದ ಮಹಿಳೆಯನ್ನು ಭಿಕ್ಷಾಟನಾ ಅಪರಾಧಕ್ಕಾಗಿ ಬಂಧಿಸಿ ಭಿಕ್ಷುಕರ/ ನಿರಾಶ್ರಿತರ ಪರಿಹಾರ ಕೇಂದ್ರಗಳಲ್ಲಿ ನಿಯಮಾನುಸಾರ ರಕ್ಷಣೆಯಲ್ಲಿ ಇಡಲಾಗುವುದು.

ತೃತೀಯ ಲಿಂಗಿಗಳು ಭಿಕ್ಷಾಟನೆಯಲ್ಲಿ ತೊಡಗಿದ್ದಲ್ಲಿ, ಅವರುಗಳನ್ನು ಬಂಧಿಸಲು ಮೇಲ್ಕಂಡ ವಯೋಮಿತಿಗಿಂತ ಕಡಿಮೆ ಇರುವ ಮಕ್ಕಳನ್ನು ಬಂಧಿಸಲು ಕರ್ನಾಟಕ ಭಿಕ್ಷಾಟನಾ ನಿಷೇಧ ಅಧಿನಿಯಮ 1975 ದಲ್ಲಿ ಅವಕಾಶ ಇರುವುದಿಲ್ಲ.

ಆದಾಗ್ಯೂ, ಸಾರ್ವಜನಿಕ ದೂರುಗಳ ಮೇರೆಗೆ ಭಿಕ್ಷಾಟನೆಯಲ್ಲಿ ತೊಡಗಿರುವ ತೃತೀಯ ಲಿಂಗಿಗಳನ್ನು ಪೊಲೀಸರು ಕೇಂದ್ರಕ್ಕೆ ಕರೆತರುವ ಸಂದರ್ಭಗಳಲ್ಲಿ ಸ್ವೀಕೃತಾಧಿಕಾರಿಗಳ ಹಂತದಲ್ಲಿ ಪ್ರಾಥಮಿಕ ವಿಚಾರಣೆ ನಡೆಸಿ, ಅವರು ಭಿಕ್ಷೆ ಬೇಡುವುದು ಖಚಿತಗೊಂಡಲ್ಲಿ ಅಂತಹವರಿಂದ ಇನ್ನು ಮುಂದೆ ಭಿಕ್ಷೆ ಬೇಡುವುದಿಲ್ಲವೆಂದು ಮುಚ್ಚಳಿಕೆ ಪತ್ರ ಪಡೆದು ಎಚ್ಚರಿಕೆ ನೀಡಿ, ಬಿಡುಗಡೆ ಮಾಡಲಾಗುತ್ತಿದೆ.

2021–22ನೇ ಸಾಲಿನಲ್ಲಿ ಭಿಕ್ಷಾಟನೆಯಲ್ಲಿ ತೊಡಗಿದ ತೃತೀಯ ಲಿಂಗಿಗಳನ್ನು ಪೊಲೀಸರು ಬಂಧಿಸಿ, ಬೆಂಗಳೂರು ನಿರಾಶ್ರಿತರ ಪರಿಹಾರ ಕೇಂದ್ರದ ವಶಕ್ಕೆ ನೀಡಲಾಗಿರುವ ಹಾಗೂ ಎಚ್ಚರಿಕೆ ನೀಡಿ, ಬಿಡುಗಡೆ ಮಾಡಲಾಗಿರುವ ಅಂಕಿ ಅಂಶಗಳನ್ನು ಈ ಪೂರಕ ಟಿಪ್ಪಣಿಗೆ ಲಗತ್ತಿಸಿದೆ.